RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**


| ಸಂಪುಟ ೧೪೮<br>**Volume 148** | ಬೆಂಗಳೂರು, ಗುರುವಾರ, ಆಗಸ್ಟ್ ೧, ೨೦೧೩ (ಶ್ರಾವಣ ೧೦, ಶಕ ವರ್ಷ ೧೯೩೫)<br>**Bangalore, Thursday, August 1, 2013 (Shravana 10, Shaka Varsha 1935)** | ಸಂಚಿಕೆ ೩೧<br>**Issue 31** |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಬಿ.ಜಿ. ನಾವಲಗಿ, ಮಾಜಿ, ಸಿ.ಹೆಚ್.ಸಿ.–1564, ಬೆಳಗಾವಿ, ಇವರ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ : ಸಿಬಿ (8) 133/2009–10, (ಓ.ಬಿ. ಸಂಖ್ಯೆ : 139/2012) ದಿನಾಂಕ : 31–08–2012.
2. ಅರ್ಜಿದಾರರ ಮೇಲ್ಮನವಿ ಅರ್ಜಿ ದಿನಾಂಕ : 29–09–2012.
3. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಸಿಬಿ(8) 133/2009–10, ದಿನಾಂಕ : 28–12–2012.

**ಪ್ರಸ್ತಾವನೆ :**

ಶ್ರೀ ಬಿ.ಜಿ. ನಾವಲಗಿ, ಮಾಜಿ ಸಿ.ಹೆಚ್.ಸಿ–1564, ಇವರು ಮಾರ್ಕೆಟ್ ಪೊಲೀಸ್ ಠಾಣೆ, ಬೆಳಗಾವಿ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ತೀವ್ರ ಕರ್ತವ್ಯಚ್ಯುತಿ ಹಾಗೂ ದುರ್ನಡತೆಯನ್ನು ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :–**

> "ಶ್ರೀ ಬಿ.ಜಿ. ನಾವಲಗಿ, ಮಾಜಿ ಸಿ.ಹೆಚ್.ಸಿ.–1564, ಆದ ನೀವು ಮಾರ್ಕೆಟ್ ಪೊಲೀಸ್ ಠಾಣೆಯಲ್ಲಿ ಠಾಣಾ ಬರಹಗಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು ನೀವು ಮಾರ್ಕೆಟ್ ಪೊಲೀಸ್ ಠಾಣಾ ಗುನ್ನ ನಂ. 255/2007 ಕಲಂ 381, 406 ಐಪಿಸಿ ಪ್ರಕರಣದಲ್ಲಿ ಜಪ್ತಾದ ಮುದ್ದೆ ಮಾಲು ಹಾಗೂ ನಗದು ರೂ. 3,53,707/– ಹಣವನ್ನು ಸಿ.ಪಿ.ಸಿ.–2058 ರವರಂತೆಯೇ ನಕಲಿ ಸಹಿ ಮಾಡಿ ನಕಲಿ ಪಿ.ಆರ್. ನಂ. 144/2008 ನೇದ್ದನ್ನು ರಿಜಿಸ್ಟರ್‌ನಲ್ಲಿ ನಮೂದಿಸಿ ಸದರಿ ಪ್ರಕರಣದಲ್ಲಿ ಕ್ರಮ ಸಂಖ್ಯೆ : 01 ರಿಂದ 11ರ ವರೆಗೆ ಜಪ್ತಾದ ಮುದ್ದೆ ಮಾಲನ್ನು ನ್ಯಾಯಾಲಯಕ್ಕೆ ಸಲ್ಲಿಸಿದಂತೆ ನಕಲಿ ಸ್ವೀಕೃತಿ ಪಿ.ಆರ್. ನಂ. 144/2008 ನೇದ್ದನ್ನು ಮುದ್ದೆ ಮಾಲು ರಿಜಿಸ್ಟರ್‌ನಲ್ಲಿ ನಮೂದಿಸಿ ನಗದು ರೂ. 3,53,707/– ಹಣವನ್ನು ಸ್ವಂತಕ್ಕೆ ಉಪಯೋಗಿಸಿಕೊಂಡು ಸರ್ಕಾರಿ ಹಣವನ್ನು ದುರ್ಬಳಕೆ ಮಾಡಿಕೊಂಡು ಕರ್ತವ್ಯ ನಿರ್ಲಕ್ಷ್ಯತೆ ಬೇಜವಾಬ್ದಾರಿತನ ಕರ್ತವ್ಯಚ್ಯುತಿ ಎಸಗಿ ಅಧಿಕಾರ ದುರುಪಯೋಗ ಪಡಿಸಿಕೊಂಡು ಕರ್ತವ್ಯಲೋಪವೆಸಗಿರುತ್ತೀರಿ. ಮಾರ್ಕೆಟ್ ಠಾಣೆಯ ಅಪರಾಧ ಸಂಖ್ಯೆ : 177/2009 ಕಲಂ 420, 465, 408, 406 ಐಪಿಸಿ ರಡಿಯಲ್ಲಿ ನಿಮ್ಮ ವಿರುದ್ಧ ಪ್ರಕರಣ ದಾಖಲಾಗಿದ್ದು. ಇದರಿಂದಾಗಿ ಇಲಾಖೆಯ ಘನತೆ ಗೌರವಕ್ಕೆ ಕುಂದುಂಟು ಮಾಡುವ ಕೆಲಸ ಮಾಡಿ ತೀವ್ರ ಕರ್ತವ್ಯಚ್ಯುತಿ ಹಾಗೂ ದುರ್ನಡತೆಯನ್ನು ಪ್ರದರ್ಶಿಸಿ ಅಧಿಕಾರ ದುರುಪಯೋಗಪಡಿಸಿಕೊಂಡಿರುತ್ತೀರಿ".

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು,

ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ : 31–08–2012 ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಲಾಗಿದೆ, ಈ ಪ್ರಕರಣದಲ್ಲಿ ಅವರು ಅಮಾನತ್ತಿನಲ್ಲಿದ್ದ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯದಲ್ಲಿ ತೀವ್ರ ಕರ್ತವ್ಯಚ್ಯುತಿ ಹಾಗೂ ದುರ್ನಡತೆಯನ್ನು ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಅದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 109 ಪೊಸಿಅ 2012, ಬೆಂಗಳೂರು, ದಿನಾಂಕ : 20–06–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ.ಜಿ. ನಾವಲಗಿ, ಮಾಜಿ ಸಿ.ಹೆಚ್.ಸಿ.–1564, ಬೆಳಗಾವಿ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

P.R. 707

SC - 30

## ಒಳಾಡಳಿತ ಸಚಿವಾಲಯ

**ವಿಷಯ** : ಶ್ರೀ ಪಿ.ಎಂ. ಹರೀಶ್ ಕುಮಾರ್, ಪಿ.ಎಸ್.ಐ., ಕೆ.ಆರ್. ಸಾಗರ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಬಳ್ಳಾರಿ, ಇವರ ಆದೇಶ ಸಂಖ್ಯೆ : 55/ಪಿಆರ್/ಸಿಬ್ಬಂದಿ–4/2011 (ಜಿ.ಆ. ಸಂಖ್ಯೆ : 38/2012) ದಿನಾಂಕ : 02–02–2012.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರ ಹಿಂಬರಹ ಸಂಖ್ಯೆ : 49/ಸಿಬ್ಬಂದಿ–2/2012–13, ದಿನಾಂಕ : 16–10–2012.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ : 30–10–2012.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2) 37/2012–13, ದಿನಾಂಕ : 01–04–2013.

**ಪ್ರಸ್ತಾವನೆ :**

ಶ್ರೀ ಪಿ.ಎಂ. ಹರೀಶ್ ಕುಮಾರ್, ಪಿ.ಎಸ್.ಐ., ಕೆ.ಆರ್. ಸಾಗರ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರು ಈ ಹಿಂದೆ ಸಂಡೂರು ಪೊಲೀಸ್ ಠಾಣೆ, ಬಳ್ಳಾರಿ ಜಿಲ್ಲೆಯಲ್ಲಿ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಘೋರ ನಿರ್ಲಕ್ಷ್ಯತನ, ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :–**

"ವರ್ಕ್‌ಡನ್ ಸ್ಟೇಟ್‌ಮೆಂಟ್‌ನ್ನು ವಿಳಂಭವಾಗಿ ಸಲ್ಲಿಸಿ, ಕರ್ತವ್ಯದಲ್ಲಿ ನಿರ್ಲಕ್ಷತನ ತೋರಿದ ಬಗ್ಗೆ".

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧಿಕ್ಷಕರು, ಬಳ್ಳಾರಿ, ಇವರು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ : 02–02–2012 ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು (01) ತಿಂಗಳ ಕಾಲ ತಡೆಹಿಡಿಯುವ ದಂಡನೆಯನ್ನು ವಿಧಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ : 16–10–2012ರ ಹಿಂಬರಹದಲ್ಲಿ ಮೇಲ್ಮನವಿಯನ್ನು ಕಾಲ ವಿಳಂಬಿತ ಮೇಲ್ಮನವಿಯೆಂದು ಪರಿಗಣಿಸಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಘೋರ ನಿರ್ಲಕ್ಷ್ಯತನ,

ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 116 ಪೊಸಿಅ 2012, ಬೆಂಗಳೂರು, ದಿನಾಂಕ : 20–06–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಪಿ.ಎಂ. ಹರೀಶ್ ಕುಮಾರ್, ಪಿ.ಎಸ್.ಐ., ಕೆ.ಆರ್. ಸಾಗರ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**P.R. 708**
**SC - 30**

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಡಿ. ಗೋವಿಂದರಾಜ್, ಸಿ.ಪಿ.ಸಿ.–964, ಚಿತ್ತವಾಡಗಿ ಪೊಲೀಸ್ ಠಾಣೆ, ಬಳ್ಳಾರಿ ಜಿಲ್ಲೆ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬಳ್ಳಾರಿ, ಇವರ ಆದೇಶ ಸಂಖ್ಯೆ : 6/ಇವಿ/ ಸಿಬ್ಬಂದಿ–4/2009 (ಜಿ.ಆ. ಸಂಖ್ಯೆ : 349/2011) ದಿನಾಂಕ : 12–09–2011.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ : 41/ಅಪೀಲು/ಸಿಬ್ಬಂದಿ–2/2011–12, (ಓ.ಬಿ. ಸಂಖ್ಯೆ : 12/2012–13) ದಿನಾಂಕ: 20–04–2012.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ : 13–08–2012.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2) 28/2012–13, ದಿನಾಂಕ : 25–10–2012.

**ಪ್ರಸ್ತಾವನೆ :**

ಶ್ರೀ ಡಿ. ಗೋವಿಂದರಾಜ್, ಸಿ.ಪಿ.ಸಿ–964, ಚಿತ್ತವಾಡಗಿ ಪೊಲೀಸ್ ಠಾಣೆ, ಬಳ್ಳಾರಿ ಜಿಲ್ಲೆ, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಅತೀವ ದುರ್ನಡತೆ, ಬೇಜವಾಬ್ದಾರಿತನ ಹಾಗೂ ಅನಧಿಕೃತ ಗೈರುಹಾಜರಾದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :–**

I. ನೀವು ಬಳ್ಳಾರಿ ತಾಲ್ಲೂಕು ವಣೇನೂರು ಗ್ರಾಮದ ಶ್ರೀಮತಿ ತಿಮ್ಮಕ್ಕ, ಇವರನ್ನು ಐದು ವರ್ಷಗಳ ಹಿಂದೆ ವಿವಾಹವಾಗಿದ್ದು, ಮದುವೆಯ ಸಂದರ್ಭದಲ್ಲಿ ರೂ. 25,000/– ಗಳನ್ನು ವರದಕ್ಷಿಣೆಯಾಗಿ ಪಡೆದುಕೊಂಡಿದ್ದಲ್ಲದೇ, ಇನ್ನೂ ರೂ. 25,000/–ಗಳ ವರದಕ್ಷಿಣೆ ತಂದು ಕೊಡುವಂತೆ ನೀವು ಮತ್ತು ನಿಮ್ಮ ತಾಯಿಯಾದ ಶ್ರೀಮತಿ ತಿಮ್ಮಕ್ಕ ಹಾಗೂ ಅಕ್ಕಂದಿರಾದ ಯರ್ರೆಮ್ಮ, ಪದ್ಮಾವತಿ ಮತ್ತು ನಿಮ್ಮ ತಂಗಿಯಾದ ಗುರುಬಸಮ್ಮ ಹಾಗೂ ವೆಂಕಟೇಶ್, ಚಿತ್ರಗುಡಿ, ಇವರುಗಳು ನಿಮ್ಮ ಹೆಂಡತಿಗೆ ಮಾನಸಿಕವಾಗಿ ಹಾಗೂ ದೈಹಿಕವಾಗಿ ಚಿತ್ರಹಿಂಸೆ ನೀಡಿದ್ದರಿಂದ ದಿನಾಂಕ : 31–08–2008 ರಂದು ಸಿರಿವಾರ ಗ್ರಾಮದಲ್ಲಿ ರಾತ್ರಿ ಸಮಯದಲ್ಲಿ ಮೈಮೇಲೆ ಸೀಮೆ ಎಣ್ಣೆ ಸುರಿದುಕೊಂಡು ಬೆಂಕಿ–ಹಚ್ಚಿಕೊಂಡು ಮರಣ ಹೊಂದಿರುತ್ತಾರೆ.

II. ನೀವು ವಿವಾಹದ ಸಮಯದಲ್ಲಿ ರೂ. 25,000/– ಗಳನ್ನು ವರದಕ್ಷಿಣೆಯಾಗಿ ಪಡೆದುಕೊಂಡಿದ್ದಲ್ಲದೇ, ಮತ್ತೆ ರೂ. 25,000/–ಗಳ ವರದಕ್ಷಿಣೆ ತರಲು ನಿಮ್ಮ ಹೆಂಡತಿಗೆ ಪೀಡಿಸಿ, ಕರ್ನಾಟಕ ಸಿವಿಲ್ ಸೇವಾ ನಿಯಮಗಳು 1957ರ ನಿಯಮ 8ರ ಪ್ರಕಾರ ಕರ್ತವ್ಯದಲ್ಲಿ ದುರ್ನಡತೆ ತೋರಿಸಿರುತ್ತೀರಿ.

III. ದಿನಾಂಕ : 05–09–2008 ರಿಂದ ಮೇಲಾಧಿಕಾರಿಗಳಿಗೆ ಯಾವುದೇ ಮಾಹಿತಿ ನೀಡದೇ ಗೈರುಹಾಜರಾಗಿ ಕರ್ತವ್ಯದಲ್ಲಿ ಬೇಜವಾಬ್ದಾರಿತನ ತೋರಿರುತ್ತೀರಿ.

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬಳ್ಳಾರಿ, ಇವರ ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ : 12–09–2011 ರ ಆದೇಶದಲ್ಲಿ ಅರ್ಜಿದಾರರ ಮೂರು ಮುಂದಿನ ವಾರ್ಷಿಕ ವೇತನ ಬಡ್ತಿಗಳನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ತಡೆಹಿಡಿಯಲಾಗಿದೆ ಹಾಗೂ ಗೈರುಹಾಜರಾದ ಅವಧಿ ದಿನಾಂಕ : 05–09–2008 ರಿಂದ 24–11–2008ರ ವರೆಗೆ 80 ದಿನಗಳ ಅವಧಿಯನ್ನು ಸಂಬಳರಹಿತ ರಜೆ ಎಂದು ಮತ್ತು ದಿನಾಂಕ : 25–11–2008 ರಿಂದ 01–06–2009 ರ ವರೆಗೆ 188 ದಿನಗಳ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ : 20–04–2012 ತಿರಸ್ಕರಿಸಲಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಅತೀವ ದುರ್ನಡತೆ, ಬೇಜವಾಬ್ದಾರಿತನ ಹಾಗೂ ಅನಧಿಕೃತ ಗೈರುಹಾಜರಾಗಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 86 ಪೊಸಿಅ 2012, ಬೆಂಗಳೂರು, ದಿನಾಂಕ : 20–06–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಡಿ. ಗೋವಿಂದರಾಜ್, ಸಿ.ಪಿ.ಸಿ–964, ಚಿತ್ತವಾಡಗಿ ಪೊಲೀಸ್ ಠಾಣೆ, ಬಳ್ಳಾರಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**P.R. 709**
**SC - 30**

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಜಿ. ವೆಂಕಟಪ್ಪ, ಸಿ.ಹೆಚ್.ಸಿ.–112, ತಿರುಮಣಿ ಪೊಲೀಸ್ ಠಾಣೆ, ಪಾವಗಡ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ, ಇವರ ಆದೇಶ ಸಂಖ್ಯೆ : ಪನ್ಸಿ/100/2007–08, (ಓ.ಬಿ. ಸಂಖ್ಯೆ : 581/08) ದಿನಾಂಕ : 29–08–2008.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರ ಹಿಂಬರಹ ಸಂಖ್ಯೆ : ಅಪೀಲು/70/ಪನ್ಸಿ/2009–10, ದಿನಾಂಕ : 24–10–2009.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ : 09–12–2011.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು(2) 58/2011–12, ದಿನಾಂಕ : 14–03–2013.

**ಪ್ರಸ್ತಾವನೆ :**

ಶ್ರೀ ಜಿ. ವೆಂಕಟಪ್ಪ, ಸಿ.ಹೆಚ್.ಸಿ–112, ಇವರು ಸಿ.ಆರ್.ಪುರ ಪೊಲೀಸ್ ಠಾಣೆ, ತುಮಕೂರು, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ ಹಾಗೂ ದುರ್ನಡತೆ, ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :–**

"ನೀವು ದಿನಾಂಕ : 30–11–2007 ರಂದು ಕೇಂದ್ರ ಸ್ಥಾನವನ್ನು ಬಿಡಲು ಯಾವುದೇ ಅನುಮತಿಯನ್ನು ಪಡೆಯದೆ ತುಮಕೂರಿನ ನಿಮ್ಮ ವಾಸದ ಮನೆಗೆ ಬಂದು ನೀರು ಬಿಡುವ ವಿಷಯದಲ್ಲಿ ಶ್ರೀಮತಿ ವಿಜಯಲಕ್ಷ್ಮಿ ಎಂಬುವವರ ಮೇಲೆ ಹಿಂದಿನ ದ್ವೇಷದಿಂದ ನಿಮ್ಮ ಹೆಂಡತಿ ಮತ್ತು ಮಗನೊಂದಿಗೆ ಸೇರಿಕೊಂಡು ಹಲ್ಲೆಮಾಡಿ, ಅವರಿಗೆ ಪ್ರಾಣ ಭಯ ಹುಟ್ಟಿಸಿ, ಕಬ್ಬಿಣದ ರಾಡಿನಿಂದ ಹೊಡೆದಿದ್ದರಿಂದ ನಿಮ್ಮ ವಿರುದ್ಧ ಎನ್.ಇ.ಪಿ.ಎಸ್. ಠಾಣೆ ಮೊಕದ್ದಮೆ ನಂ. 188/07 ಕಲಂ 323, 324, 504, 354 506(ಬಿ) ರೆ/ವಿ 34 ಐಪಿಸಿ ರೀತ್ಯಾ ಪ್ರಕರಣವು ದಾಖಲಾಗಿದ್ದು, ದಿನಾಂಕ : 07–12–2007 ರಂದು ನ್ಯಾಯಾಲಯಕ್ಕೆ ನಿಮ್ಮ ವಿರುದ್ಧ ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಲು ಕಾರಣರಾಗಿರುತ್ತೀರಿ. ಇದು ನಿಮ್ಮ ಕರ್ತವ್ಯದಲ್ಲಿ ದುರ್ನಡತೆ ಮತ್ತು ನಿರ್ಲಕ್ಷ್ಯತೆಯನ್ನು ತೋರಿಸಿರುತ್ತದೆ."

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ : 29–08–2008 ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಒಂದು ವರ್ಷ (01) ಕಾಲ ಮುಂದೂಡುವ ದಂಡನೆಯನ್ನು ವಿಧಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ : 24–10–2009 ರ ಹಿಂಬರಹದಲ್ಲಿ, ಮೇಲ್ಮನವಿಯನ್ನು ಶಿಸ್ತು ಪ್ರಾಧಿಕಾರದ ದಂಡನಾದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ವಿಳಂಬವಾಗಿ ಸಲ್ಲಿಸಿರುವುದರಿಂದ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ನಿಯಮ 11ರ ಪ್ರಕಾರ ಪರಿಗಣಿಸಲು ಅವಕಾಶವಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ ಹಾಗೂ ದುರ್ನಡತೆ, ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 136 ಪೊಸಿಅ 2011, ಬೆಂಗಳೂರು, ದಿನಾಂಕ : 20–06–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಿ. ವೆಂಕಟಪ್ಪ, ಸಿ.ಹೆಚ್.ಸಿ.–112, ತಿರುಮಣಿ ಪೊಲೀಸ್ ಠಾಣೆ, ಪಾವಗಡ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

P.R. 710
SC - 30

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

**ವಿಷಯ :** ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗದ ಅಧ್ಯಕ್ಷರ ಮತ್ತು ಸದಸ್ಯರುಗಳ ಸಂಭಾವನೆಯನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸಂವ್ಯಶಾಇ 51 ಭಾನಿವಿ 2008, ದಿನಾಂಕ : 27–11–2008.
2. ಅಧ್ಯಕ್ಷರು, ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗ ಇವರ ಪತ್ರ ಸಂಖ್ಯೆ: ಕರಾಭಾ (ವಿ) ಆ19/ಸಂಭಾವ/2012, ದಿನಾಂಕ : 07–02–2012.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗದ ಅಧ್ಯಕ್ಷರಿಗೆ ಪ್ರತಿ ದಿನ ರೂ. 500.00 ರಂತೆ ಗರಿಷ್ಠ ತಿಂಗಳಿಗೆ ರೂ. 10,000.00 ಹಾಗೂ ಸದಸ್ಯರಿಗೆ ಪ್ರತಿ ದಿನ ರೂ. 400.00 ರಂತೆ ಗರಿಷ್ಠ ತಿಂಗಳಿಗೆ ರೂ. 8,000.00ಗಳ ಸಂಭಾವನೆಯನ್ನು ನಿಗದಿಪಡಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗದ ಅಧ್ಯಕ್ಷರ ಮನವಿ ದಿನಾಂಕ : 07–02–2012ರಲ್ಲಿ ಆಯೋಗದ ಅಧ್ಯಕ್ಷರಿಗೆ ಪ್ರತಿ ದಿನ 800.00 ರಂತೆ ಗರಿಷ್ಠ ತಿಂಗಳಿಗೆ ರೂ. 15,000.00 ಹಾಗೂ ಸದಸ್ಯರಿಗೆ ಪ್ರತಿ ದಿನ ರೂ. 600.00 ರಂತೆ ಗರಿಷ್ಠ ತಿಂಗಳಿಗೆ ರೂ. 12,000.00 ಗಳ ಸಂಭಾವನೆಯನ್ನು ನಿಗದಿಪಡಿಸಲು ಕೋರಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಆಯೋಗದ ಅಧ್ಯಕ್ಷರು ಹಾಗೂ ಸದಸ್ಯರುಗಳ ಸಂಭಾವನೆಯನ್ನು ಪರಿಷ್ಕರಿಸಲು ನಿರ್ಣಯಿಸಲಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಂವ್ಯಶಾಇ 50 ಭಾನಿವಿ 2012, ಬೆಂಗಳೂರು, ದಿನಾಂಕ : 03–05–2013.**

ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗದ ಅಧ್ಯಕ್ಷರಿಗೆ ದಿನಾಂಕ : 02–02–2013 ರಿಂದ ಜಾರಿಗೆ ಬರುವಂತೆ ರಾಜಭಾಷಾ (ವಿಧಾಯೀ) ಆಯೋಗವನ್ನು ಪುನರ್ ರಚಿಸಲಾಗಿದ್ದು, ಅದರ ಅಧ್ಯಕ್ಷರ ಸಂಭಾವನೆಯನ್ನು ದಿನವೊಂದಕ್ಕೆ ರೂ. 500/– ರಿಂದ ರೂ. 750/– ಗಳಿಗೆ ಮತ್ತು ಮಾಸಿಕ ಗರಿಷ್ಠ ಸಂಭಾವನೆಯನ್ನು ರೂ. 10,000/– ರಿಂದ ರೂ. 15,000/–ಗಳಿಗೆ ಹಾಗೂ ಸದಸ್ಯರಿಗೆ ದಿನಮೊಂದಕ್ಕೆ ರೂ. 400/– ರಿಂದ ರೂ. 500/–ಗಳಿಗೆ ಮತ್ತು ಮಾಸಿಕ ಗರಿಷ್ಠ ಸಂಭಾವನೆಯನ್ನು ರೂ. 8,000/– ರಿಂದ ರೂ. 10,000/–ಕ್ಕೆ ಸಂಭಾವನೆಯನ್ನು ದಿನಾಂಕ : 02–02–2013 ರಿಂದ ಜಾರಿಗೆ ಬರುವಂತೆ ಪರಿಷ್ಕರಿಸಿ ನಿಗದಿ ಪಡಿಸಿದೆ.

ಈ ಆಯೋಗಕ್ಕೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2052–ಸಚಿವಾಲಯ–ಸಾಮಾನ್ಯ ಸೇವೆ–092–08–ಭಾಷಾಂತರ ನಿರ್ದೇಶಕರು–ರಾಜಭಾಷಾ (ವಿಧಾಯೀ) ಆಯೋಗ–(ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 66 ವೆಚ್ಚ–10/2013, ದಿನಾಂಕ : 24–04–2013ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ. ಶ್ರೀಧರ್**
ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ
(ಪೊಲೀಸ್ ಸೇವೆಗಳು).

P.R. 711

## INFRASTRUCTURE DEVELOPMENT SECRETARIAT

**SUB :** Release of Funds to M/s iMaCS to Carry out the Consultancy Services for "Institutional Strengthening & Sector Specific Inventory for PPP Mainstreaming" for Directorate of Municipal Administration.

**READ :**

1. Letter No. IDD 104 ITS 2011, dated : 19-01-2012.
2. G.O. No. ID 37 ITS 2012, dated : 03-09-2012
3. Bill No. CS/255/2012-13, dated 30-06-2012 from the Company Secretary and Senior Mangaer (Finance)
4. Bill No. CS/256/2012-13, dated 30-06-2012 from the Company Secretary and Senior Manager (Finance).
5. Bill No. CS/257/2012-13, dated 30-06-2012 from the Company Secretary and Senior Manager (Finance)
6. Letter No. MRC/GIM-2012/DMA/02/2011-12 dated 07-02-2013 from the Commissioner, DMA, Bangalore.

**Preamble :**

In the letter read at (1) above, IDD has awarded the task of Consultancy Services for "Institutional Strengthening and Sector Specific Inventory for PPP Mainstreaming" for Directorate of Municipal Administration to M/s. ICRA Management Consulting Services Ltd. (iMaCS) for which IDD would pay an amount of Rs. 32,53,850/- (inclusive of taxes) as per the payment schedule in the RFP.

2.In the G.O. read at (2) above, Rs. 2,44,040/- (Rupees Two Lakh Fourty Four Thousand and Forty) has been released to M/s ICRA Management Consulting Services Ltd., towards submission of inception report with initial sector inventory and assistance for PPP Cell formation and functioning for Directorate of Municipal Administration.

3.In the bill read at (3), (4) and (5) above, the Company Secretary and Senior Manager (Finance) M/s. ICRA Management Consulting Services Ltd. Has submitted bills for an amount of Rs. 19.88,772/- Rs. 1,65,731/- and Rs. 3,31,462/- towards submission of five Pre-feasibility Studies, submission of five Procurement Plans for selection of Transaction Advisors and assistance in Global Investors Meet 2012 for preparation of Sector Brochure and Project Profiles respectively with a request to make early payment.

4.In the letter read at (6) above, The Commissioner, Directorate of Municipal Adminstration has informed that the DMA has accorded concurrence for submission of five Pre-feasibility Studies, submission of five Procurement Plans for selection of Transaction Advisors and assistance in Global Investors Meet 2012 for preparation of Sector Brochure and Project Profiles by iMaCS and requested the Government for payment to the Consultants.

5. Hence the following order.

### GOVERNMENT ORDER NO. ID 37 ITS 2012, BANGALORE, DATED : 22-06-2013

Under the circumstances explained in the preamble, Government is pleased to accord sanction to release Rs. 24,85,965/- (Rs. 19,88,772/-+Rs. 1,65,731/-+ Rs. 3,31,462/-) (Rupees Twenty Four Lakh Eighty Five Thousand Nine Hundred Sixty Five) only towards submission of five-Pre-feasibility Studies, submission of five Procurement Plans for selection of Transaction Advisors and assistance in Global Investors Meet 2012 for preparation of Sector Brochure and Project Profiles to M/s. ICRA Management Consulting Services Ltd towards providing consultancy services for "Institutional Strengthening and Sector Specific Inventory for PPP Mainstreaming" for Directorate of Municipal Administration.

2.The expenditure shall be met out under the Budget Head "3451-00-090-1-06-059 Infrastructure Preliminary Studies other expenditure" (Plan) 2013-14.

3.The Deputy General Manager-Corporate Advisory, M/s ICRA Management Consulting Services Ltd, is authorized to draw the amount on a Payees Receipt duly countersigned by the Under Secretary to Government, Infrastructure Development from the State Huzoor Treasury, Bangalore and the cheque/DD is to be issued in favour of "ICRA Management Consulting Services Ltd" payable at Bangalore.

4.This order is issued in accordance with the delegation of financial powers to Principal Secretary/Secretary to Govt. vide G.O. No. FD 01 TFP 2013, dated 10-05-2013.

By Order and in the name of the Governor of Karnataka,
**M. VENKATESH MURTHY**
Under Secretary to Government,
Infrastructure Development Department.

**P.R. 712**

## INFRASTRUCTURE DEVELOPMENT SECRETARIAT

### CORRIGENDUM-2

### No.ID/42 / ITS / 2011, Bangalore, Dated:20.06.2013

**Ref :** 1. GO No. IDD 42 ITS 2011 dated 12.09.2011.
2. Corrigendum No. IDD 42 ITS 2011 dated 31.01.2012

In the Para 8(3) of the Annexure I (KVGF Guidelines) to the GO bearing No. IDD 42 ITS 2011 dated 12.09.2011, the words "The representative of the SLSWA, the Lead Financial institution and the Private Sector Company shall enter into a Tripartite Agreement for the purpose of this scheme. The format of such Tripartite Agreement shall be prescribed by SLSWA. SLSWA shall disburse funds to

the respective Lead Financial Institutions under the Karnataka VGF scheme from out of the funds made available on annual basis" shall be read as below:

"After Empowered Institution executed the Tripartite Agreement (TA) with the State Dept/Agency, the Lead Financial Institution and the Private Sector Company, SLSWA shall disburse funds to the respective Lead Financial Institution as per Concession Agreement".

By Order and in the name of the Governor of Karnataka

**M. Venkatesh Murthy.**

Under Secretary to Government,

Infrastructure Development Department.

**P.R. 713**

**SC - 50**

## ಸಹಕಾರ ಸಚಿವಾಲಯ

### ಸೇರ್ಪಡೆ ಆದೇಶ

### ಸಂಖ್ಯೆ : ಸಿಒ 21 ಸಿಎಲ್‌ಎಸ್ 2013, ಬೆಂಗಳೂರು, ದಿನಾಂಕ : 21ನೇ ಜೂನ್ 2013

ಯಶಸ್ವಿನಿ ಯೋಜನೆಯಡಿ 2013–14ನೇ ಸಾಲಿಗೆ ಸದಸ್ಯರನ್ನು ನೋಂದಾಯಿಸುವ ಸಲುವಾಗಿ ಹೊರಡಿಸಿದ್ದ ಸರ್ಕಾರದ ಆದೇಶ ಸಂಖ್ಯೆ: ಸಿಒ 21 ಸಿಎಲ್‌ಎಸ್ 2013 ಮಾರ್ಗಸೂಚಿ 2ರಲ್ಲಿ ಈ ಕೆಳಕಂಡ ಮಾರ್ಪಾಡುಗಳನ್ನು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

1) **ಮಾರ್ಗಸೂಚಿ 2:–** ಯಾವುದೇ ಒಂದು ಸಹಕಾರ ಸಂಘದಲ್ಲಿ ಸದಸ್ಯತ್ವ ಪಡೆದು ದಿನಾಂಕ: 01–08–2013ಕ್ಕೆ ಕನಿಷ್ಠ ಆರು ತಿಂಗಳಾಗಿರಬೇಕು ಎಂಬುದರ ಬದಲಾಗಿ ಕನಿಷ್ಠ ಮೂರು ತಿಂಗಳಾಗಿರಬೇಕು ಎಂದು ಓದಿಕೊಳ್ಳತಕ್ಕದ್ದು.

2) **ಮಾರ್ಗಸೂಚಿ 29:–** ಹೊಸದಾಗಿ ಸೇರಿಸಲಾಗಿದೆ.

ಈಗಾಗಲೇ ಯಾವುದೇ ಸಹಕಾರ ಸಂಘಗಳು 2013–14ನೇ ಸಾಲಿಗೆ ವಂತಿಗೆಯಾಗಿ ಸದಸ್ಯರಿಂದ ಹಣವನ್ನು ಸಂಗ್ರಹಿಸಿದ್ದರೆ ಅಥವಾ ಯಾವುದೇ ಸದಸ್ಯರು 15, ಜುಲೈ 2013ಕ್ಕಿಂತ ಮುಂಚೆ ನೋಂದಾಯಿಸಿಕೊಳ್ಳಲು/ನವೀಕರಿಸಲು ಮುಂದೆ ಬಂದರೆ ಅವರಿಂದ ವಂತಿಗೆ ಹಣವನ್ನು ಸ್ವೀಕರಿಸಿ 2013–14ನೇ ಸಾಲಿನ ವಂತಿಗೆಯೆಂದು ರಶೀತಿಯಲ್ಲಿ ಸ್ಪಷ್ಟವಾಗಿ ನಮೂದಿಸಬೇಕು. ಯಶಸ್ವಿನಿ ಕಾರ್ಡ್‌ಗಳನ್ನು 15, ಜುಲೈ 2013ರಿಂದ ಮಾತ್ರ ವಿತರಿಸಬೇಕು. ಹಣವನ್ನು ಮುಂಚಿತವಾಗಿ ಪಾವತಿಸಿದ್ದರೂ 2013–14ನೇ ಸಾಲಿಗೆ ಯೋಜನೆಯ ಅನುಷ್ಠಾನವನ್ನು ದಿನಾಂಕ : 01–08–2013ರಿಂದ ಆರಂಭವಾಗುವುದು ಹಾಗೂ, ಮಾರ್ಗಸೂಚಿ 14ರಲ್ಲಿ ತಿಳಿಸಿರುವಂತೆ 2012–13ನೇ ಸಾಲಿನಲ್ಲಿ ನೋಂದಾಯಿಸಿಕೊಂಡವರಿಗೆ ದಿನಾಂಕ : 31–08–2013ರವರೆಗೆ ಯೋಜನಾ ಸೌಲಭ್ಯವನ್ನು ಹಳೆಯ ಕಾರ್ಡ್‌ನ ಮೇಲೆಯೇ ವಿಸ್ತರಿಸಲಾಗಿದೆ. ಈ ಮಾರ್ಪಾಡಿನ ಜೊತೆಗೆ ಉಳಿದೆಲ್ಲಾ ಮಾರ್ಗಸೂಚಿಗಳನ್ನು ಯಥಾವತ್ತಾಗಿ ಪಾಲಿಸುವುದು.

**ಜಿ. ಎಸ್. ರಮಣರೆಡ್ಡಿ,**

ವಿಶೇಷ ಕರ್ತವ್ಯಾಧಿಕಾರಿ ಮತ್ತು ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ,

ಸಹಕಾರ ಇಲಾಖೆ.

**P.R. 728**

**SC - 25**

## ಆರ್ಥಿಕ ಸಚಿವಾಲಯ

**ವಿಷಯ:** ನ್ಯಾಯಾಂಗ ಅಧಿಕಾರಿಗಳ ದ್ವೈವಾರ್ಷಿಕ ಸಮ್ಮೇಳನದಲ್ಲಿ ಭಾಗವಹಿಸುವ ನ್ಯಾಯಾಧೀಶರಿಗೆ ವಿಶೇಷ ಸಾಂದರ್ಭಿಕ ರಜೆ ಮಂಜೂರು ಮಾಡುವ ಬಗ್ಗೆ.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ನ್ಯಾಯಾಂಗ ಅಧಿಕಾರಿಗಳ ಸಂಘವು ದ್ವೈವಾರ್ಷಿಕ ಸಮ್ಮೇಳನವನ್ನು ಆಯೋಜಿಸುತ್ತಿದ್ದು, ಈ ಸಮ್ಮೇಳನದಲ್ಲಿ ರಾಜ್ಯದ ಎಲ್ಲಾ ನ್ಯಾಯಾಂಗ ಅಧಿಕಾರಿಗಳು ಭಾಗವಹಿಸುವುದು ಕಡ್ಡಾಯವಾಗಿದೆ. ಈ ಹಿನ್ನೆಲೆಯಲ್ಲಿ, ನ್ಯಾಯಾಧೀಶರುಗಳು ಸಮ್ಮೇಳನದಲ್ಲಿ ಭಾಗವಹಿಸುವ ಈ ದಿನಗಳನ್ನು ನಿಯತಗೊಳಿಸುವುದನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

### ಸರ್ಕಾರಿ ಆದೇಶ ಸಂಖ್ಯೆ ಆಇ 5 ಸೇನಿಸೇ 2013 ದಿನಾಂಕ:08–04–2013

ಕರ್ನಾಟಕ ರಾಜ್ಯ ನ್ಯಾಯಾಂಗ ಅಧಿಕಾರಿಗಳ ದ್ವೈವಾರ್ಷಿಕ ಸಮ್ಮೇಳನದಲ್ಲಿ ಎಲ್ಲಾ ನ್ಯಾಯಾಧೀಶರು ಭಾಗವಹಿಸುವುದು ಕಡ್ಡಾಯವಾಗಿದ್ದು, ಈ ಸಮ್ಮೇಳನದಲ್ಲಿ ನ್ಯಾಯಾಧೀಶರುಗಳ ಭಾಗವಹಿಸುವ ಈ ಅವಧಿಯನ್ನು ವಿಶೇಷ ಸಾಂದರ್ಭಿಕ ರಜೆಯೆಂದು ಪರಿಗಣಿಸಿ ನಿಯತಗೊಳಿಸುವಲ್ಲಿ ಸರ್ಕಾರವು ಈ ಮೂಲಕ ಅನುಮತಿಸಿದೆ ಹಾಗೂ ಈ ಸಂಬಂಧದಲ್ಲಿನ ಪ್ರಯಾಣಗಳಿಗೆ ಪ್ರಯಾಣ ಭತ್ಯೆಯ ಸೌಲಭ್ಯಕ್ಕೆ ಅರ್ಹರಾಗತಕ್ಕದ್ದಲ್ಲ ಎಂದು ಸರ್ಕಾರವು ಆದೇಶಿಸಿದೆ.

ಕರ್ನಾಟಕ ಸರ್ಕಾರಿ ನೌಕರರಿಗೆ ಸಾಂದರ್ಭಿಕ ರಜೆ ಮಂಜೂರು ಮಾಡುವುದನ್ನು ವಿನಿಮಯಗೊಳಿಸುವುದಕ್ಕೆ ಸಂಬಂಧಿಸಿದ ಕರ್ನಾಟಕ ನಾಗರೀಕ ಸೇವಾ ನಿಯಮಗಳಲ್ಲಿನ (ಅನುಬಂಧ 'ಬಿ') ಗೆ ಸೂಕ್ತ ಸೇರ್ಪಡೆಯನ್ನು ಪ್ರತ್ಯೇಕವಾಗಿ ಪರಿಗಣಿಸಲಾವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆಲಿಸ್ ಗೊನ್ಸಾಲ್ವಿಸ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸೇವೆಗಳು).

**P.R. 732**

**SC - 100**

**ಆರ್ಥಿಕ ಸಚಿವಾಲಯ**

**ವಿಷಯ:** ಕರ್ನಾಟಕ ರಾಜ್ಯ ಸರ್ಕಾರಿ ನೌಕರರಿಗೆ ಭಾರತದಲ್ಲಿನ ಯಾವುದೇ ಸ್ಥಳಕ್ಕೆ ಮಾಡುವ ಪ್ರಯಾಣಕ್ಕೆ ರಜಾ ಪ್ರಯಾಣ ರಿಯಾಯಿತಿ ಸೌಲಭ್ಯ ಮಂಜೂರಾತಿ– ನಿಯಮದ ಸಡಿಲಿಕೆ ಬಗ್ಗೆ.

**ಪ್ರಸ್ತಾವನೆ:**

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 550(4)ರ ಪ್ರಕಾರ ರಾಜ್ಯ ಸರ್ಕಾರಿ ನೌಕರರು ಭಾರತದಲ್ಲಿನ ಯಾವುದೇ ಸ್ಥಳಕ್ಕೆ ಮಾಡುವ ಪ್ರಯಾಣಕ್ಕೆ ರಜಾ ಪ್ರಯಾಣ ರಿಯಾಯಿತಿ ಸೌಲಭ್ಯವನ್ನು ಹದಿನೈದು ದಿನಗಳಿಗಿಂತ ಕಡಿಮೆಯಲ್ಲದ ಗಳಿಕೆ ರಜೆ, ಅರ್ಧ ವೇತನ ರಜೆ, ಪರಿವರ್ತಿತ ರಜೆಯ ಅವಧಿಯಲ್ಲಿ ಮತ್ತು ವೆಕೇಶನ್ ಅವಧಿಯಲ್ಲಿ ಅನುಮತಿಸತಕ್ಕದಾಗಿರುತ್ತದೆ. ಕೇಂದ್ರ ಸರ್ಕಾರದ ರಜಾ ಪ್ರಯಾಣ ರಿಯಾಯಿತಿ ನಿಯಮಗಳು, 1988ರ ನಿಯಮ 7(2) ರಲ್ಲಿರುವಂತೆಯೇ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 550(4)ರಲ್ಲಿನ ಕನಿಷ್ಠ 15 ದಿನಗಳ ಗಳಿಕೆ ರಜೆ, ಅರ್ಧ ವೇತನ ರಜೆ, ಪರಿವರ್ತಿತ ರಜೆ ಮತ್ತು ವೆಕೇಶನ್ ಅವಧಿಯಲ್ಲಿ ಪಡೆಯಬೇಕೆಂಬ ಷರತ್ತನ್ನು ಕೈಬಿಟ್ಟು, ರಜಾ ಪ್ರಯಾಣ ರಿಯಾಯಿತಿ ಸೌಲಭ್ಯವನ್ನು ಸಾಂದರ್ಭಿಕ ರಜೆ ಮತ್ತು ವಿಶೇಷ ಸಾಂದರ್ಭಿಕ ರಜೆಯೂ ಒಳಗೊಂಡಂತೆ ಯಾವುದೇ ರಜೆಯ ಅವಧಿಯಲ್ಲಿ ಪಡೆಯಲು ಅವಕಾಶ ಕಲ್ಪಿಸುವಂತೆ ಕೋರಿ ಅಧ್ಯಕ್ಷರು ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಕಬ್ಬನ್ ಉದ್ಯಾನವನ, ಬೆಂಗಳೂರು ಇವರು ದಿನಾಂಕ:16–01–2013ರಂದು ಸರ್ಕಾರಕ್ಕೆ ಮಾಡಿರುವ ಮನವಿಯ ಹಿನ್ನೆಲೆಯಲ್ಲಿ ಸರ್ಕಾರವು ಈ ವಿಷಯವನ್ನು ಪರಿಶೀಲಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಆಇ 3 ಸೇನಿಸೇ 2013 ದಿನಾಂಕ:08–04–2013**

ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 550ರನ್ವಯ ಭಾರತದಲ್ಲಿನ ಯಾವುದೇ ಸ್ಥಳಕ್ಕೆ ಮಾಡುವ ಪ್ರಯಾಣಕ್ಕೆ ರಾಜ್ಯ ಸರ್ಕಾರಿ ನೌಕರರು ಪಡೆಯುವ ರಜಾ ಪ್ರಯಾಣ ರಿಯಾಯಿತಿ ಸೌಲಭ್ಯಕ್ಕಾಗಿ "ಕನಿಷ್ಠ 15 ದಿನಗಳಿಗೆ ಕಡಿಮೆಯಲ್ಲದ ಗಳಿಕೆ ರಜೆ, ಅರ್ಧ ವೇತನ ರಜೆ, ಪರಿವರ್ತಿತ ರಜೆ ಮತ್ತು ವೆಕೇಶನ್ ಅವಧಿ " ಎಂಬ ನಿರ್ಬಂಧವನ್ನು ಸಡಿಲಿಸಿ, ಈ ರಿಯಾಯಿತಿ ಸೌಲಭ್ಯವನ್ನು ಸಾಂದರ್ಭಿಕ ರಜೆ ಮತ್ತು ವಿಶೇಷ ಸಾಂದರ್ಭಿಕ ರಜೆಯೂ ಒಳಗೊಂಡಂತೆ ಯಾವುದೇ ರಜೆಯ ಅವಧಿಯಲ್ಲಿ ಅನುಮತಿಸತಕ್ಕದೆಂದು ಸರ್ಕಾರವು ಈ ಮೂಲಕ ಆದೇಶಿಸಿದೆ. ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 550(4)ಕ್ಕೆ ಸೂಕ್ತ ತಿದ್ದುಪಡಿಯನ್ನು ಪ್ರತ್ಯೇಕವಾಗಿ ಪರಿಗಣಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆಲಿಸ್ ಗೊನ್ಸಾಲ್ವಿಸ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸೇವೆಗಳು).

**P.R. 733**

**SC - 100**

ಸರ್ಕಾರಿ ಕೇಂದ್ರ ಮುದ್ರಣಾಲಯ, ಘಟಕ–2, ಬೆಂಗಳೂರು